23/2/18

86

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ರಮೇಶ ಬಾಬು (ಶಿಕ್ಷಕರ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1151

ಉತ್ತರ ದಿನಾಂಕ : 23.02.2018

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಜಿಲ್ಲೆಯಲ್ಲಿ ದಿ: 01.05.2013 ರಿಂದ ಇಲ್ಲಿಯವರೆಗೆ ಮಂಜೂರಾಗಿರುವ ಕುಡಿಯುವ ನೀರಿನ ಘಟಕಗಳ ಸಂಖ್ಯೆ ಎಷ್ಟು; ಇವುಗಳಲ್ಲಿ ಎಷ್ಟು ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲಾಗಿದೆ; ಯಾವ ಏಜೆನ್ಸಿಯ ಮುಖಾಂತರ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲಾಗಿದೆ; ಅಳವಡಿಕೆಗೆ ಬಾಕಿಯಿರುವ ಘಟಕಗಳು ಎಷ್ಟು; (ಗ್ರಾಮವಾರು ಪ್ರತಿ ತಾಲ್ಲೂಕಿನ ವಿವರಗಳನ್ನು ನೀಡುವುದು) | ತುಮಕೂರು ಜಿಲ್ಲೆಯ ವ್ಯಾಪ್ತಿಯ ಗ್ರಾಮೀಣ ಜನವಸತಿಗಳಲ್ಲಿ ದಿನಾಂಕ: 01-05-2013 ರಿಂದ ಇಲ್ಲಿಯವರೆಗೆ 1197 ನೀರು ಶುದ್ಧೀಕರನ ಘಟಕಗಳನ್ನು ಅಳವಡಿಸಲು ಮಂಜೂರಾತಿ ನೀಡಿದೆ. ಈ ಪೈಕಿ, 832 ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲಾಗಿದೆ. 305 ನೀರು ಶುದ್ಧೀಕರಣ ಘಟಕಗಳು ಅನುಷ್ಠಾನ ಪ್ರಕ್ರಿಯೆಯ ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತದೆ. 2017-18ನೇ ಸಾಲಿನಲ್ಲಿ SCP/TSP ಅನುದಾನದಲ್ಲಿ 60 ನೀರು ಶುದ್ಧೀಕರಣ ಘಟಕಗಳು ಅನುಮೋದನೆಯಾಗಿದ್ದು, ಟೆಂಡರ್ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. ತಾಲ್ಲೂಕುವಾರು ಘೋಷ್ವಾರೆ ಮತ್ತು ಏಜೆನ್ಸಿವಾರು/ಗ್ರಾಮವಾರು ವಿವರಗಳನ್ನು **ಅನುಬಂಧ-1 ರಿಂದ 4ರಲ್ಲಿ** ಸಲ್ಲಿಸಿದೆ. |
| ಆ) | ತುಮಕೂರು ಜಿಲ್ಲೆಯ ಕುಡಿಯುವ ನೀರಿನ ಘಟಕಗಳಿಗೆ ನೀಡಿರುವ ಖಾತರಿ ಅವಧಿ ಎಷ್ಟು; ಖಾತರಿಯ ಅವಧಿಯಲ್ಲಿ ಎಷ್ಟು ನೀರಿನ ಘಟಕಗಳಲ್ಲಿ ಲೋಪಗಳ ಕುರಿತು ದೂರುಗಳು ಬಂದಿರುತ್ತವೆ; ಇವುಗಳಲ್ಲಿ ಎಷ್ಟು ದೂರುಗಳನ್ನು ಸರಿಪಡಿಸಲಾಗಿದೆ; ಬಾಕಿ ಇರುವ ದೂರುಗಳು ಎಷ್ಟು; | ತುಮಕೂರು ಜಿಲ್ಲೆಯ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ ಶುದ್ಧ ಕುಡಿಯುವ ನೀರಿನ ಘಟಕಗಳಿಗೆ 07/05 ವರ್ಷ ನಿರ್ವಹಣೆಯನ್ನು ಗುತ್ತಿಗೆದಾರರೇ ಹೊಂದಿರುತ್ತಾರೆ.<br><br>ಕೆ.ಆರ್.ಐ.ಡಿ.ಎಲ್.ಸಂಸ್ಥೆ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರನ ಘಟಕಗಳ ನಿರ್ವಹಣೆಯನ್ನು ಕೆ.ಆರ್.ಐ.ಡಿ.ಎಲ್.ಸಂಸ್ಥೆರವರೆ ದಿನಾಂಕ:31.03.2018ರವರೆಗೆ ನಿರ್ವಹಿಸಲು ಕ್ರಮವಹಿಸಲಾಗುತ್ತಿದೆ.<br><br>ಸಹಕಾರ ಸಂಘ/ಸಂಸ್ಥೆ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರನ ಘಟಕಗಳ ನಿರ್ವಹಣೆಯನ್ನು ಸಹಕಾರ ಸಂಘ/ಸಂಸ್ಥೆರವರೇ ನಿರ್ವಹಿಸ ಬೇಕಾಗಿರುತ್ತದೆ.<br><br>ನಿರ್ವಹಣೆಯ ಬಗ್ಗೆ ಹಾಲಿ 136 ಘಟಕಗಳ ಬಗ್ಗೆ ದೂರುಗಳು ಬಂದಿದ್ದು ಇವುಗಳಲ್ಲಿ ಪಾವಗಡ ತಾಲ್ಲೂಕಿನ 10 ಘಟಕಗಳನ್ನು ಮತ್ತು ಮಧುಗಿರಿ ತಾಲ್ಲೂಕಿನ 3 ಘಟಕಗಳನ್ನು ಸರಿಪಡಿಸಲು ಕ್ರಮ ವಹಿಸಲಾಗಿರುತ್ತದೆ. ಬಾಕಿ 123 ದೂರುಗಳು ಬಾಕಿ ಇರುತ್ತದೆ. |

| | | |
|---|---|---|
| ಇ) | ತುಮಕೂರು ಜಿಲ್ಲೆಯಲ್ಲಿರುವ ಕುಡಿಯುವ ನೀರಿನ ಘಟಕಗಳ ನಿರ್ವಹಣೆಯ ಗುತ್ತಿಗೆಯನ್ನು ಯಾವ ಯಾವ ಏಜೆನ್ಸಿಗೆ ನೀಡಲಾಗಿದೆ: ದಿ:01.05.2013 ರಿಂದ ಇಲ್ಲಿಯವರೆಗೆ ವಾರ್ಷಿಕ ನಿರ್ವಹಣೆಗೆ ಗುತ್ತಿಗೆ ಪಾವತಿಯಾಗಿರುವ ಹಣ ಎಷ್ಟು; ನಿರ್ವಹಣಾ ಗುತ್ತಿಗೆದಾರರ ಮೇಲೆ ದೂರುಗಳು ಬಂದಿವೆಯೇ: ಬಂದಿದ್ದಲ್ಲಿ, ಅವುಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ. | ತುಮಕೂರು ಜಿಲ್ಲೆಯಲ್ಲಿರುವ ಕುಡಿಯುವ ನೀರಿನ ಘಟಕಗಳ ನಿರ್ವಹಣೆಯ ಗುತ್ತಿಗೆಯನ್ನು ಏಜೆನ್ಸಿವಾರು ವಿವರಗಳನ್ನು ಅನುಬಂಧ-1 ರಿಂದ 4ರಲ್ಲಿ ಸಲ್ಲಿಸಿದೆ.<br><br>ತುಮಕೂರು ಜಿಲ್ಲೆಯ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ ಶುದ್ಧ ಕುಡಿಯುವ ನೀರಿನ ಘಟಕಗಳಿಗೆ 07/05 ವರ್ಷ ನಿರ್ವಹಣೆಯನ್ನು ಗುತ್ತಿಗೆದಾರರೇ ಹೊಂದಿರುತ್ತಾರೆ. ನಿರ್ವಹಣೆಗೆಂದು ಪ್ರತ್ಯೇಕವಾಗಿ ಯಾವುದೇ ಹಣವನ್ನು ಪಾವತಿಸಿರುವುದಿಲ್ಲ. ನಿರ್ವಹಣೆಯ ಬಗ್ಗೆ ಹಾಲಿ 136 ಘಟಕಗಳ ಬಗ್ಗೆ ದೂರುಗಳು ಬಂದಿದ್ದು, ಗುತ್ತಿಗೆದಾರರಿಗೆ ಇಲಾಖೆಯಿಂದ ಅಂತಿಮ ನೋಟಿಸ್ ನೀಡಲಾಗಿದೆ. ಗುತ್ತಿಗೆದಾರರು ದುರಸ್ತಿ ಮತ್ತು ನಿರ್ವಹಣೆಯನ್ನು ಮಾಡದಿದ್ದಲ್ಲಿ, ಸದರಿಯವರ ವೆಚ್ಚ ಮತ್ತು ಜವಾಬ್ದಾರಿ ಮೇಲೆ (Risk & Cost) ಸದರಿಯವರ ಮೊತ್ತವನ್ನು ಮೊಟ್ಟುಗೋಲು ಹಾಕಿಕೊಂಡು ಕ್ರಮವಹಿಸುವುದಾಗಿ ತಿಳಿಸಲಾಗಿರುತ್ತದೆ.<br>ಕೆ.ಆರ್.ಐ.ಡಿ.ಎಲ್.ಸಂಸ್ಥೆ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರನ ಘಟಕಗಳ ನಿರ್ವಹಣೆಯನ್ನು ಕೆ.ಆರ್.ಐ.ಡಿ.ಎಲ್.ಸಂಸ್ಥೆರವರೆ ದಿನಾಂಕ:31.03.2018ರವರೆಗೆ ನಿರ್ವಹಿಸಲು ಕ್ರಮವಹಿಸಲಾಗುತ್ತಿದೆ.<br>ಸಹಕಾರ ಸಂಘ/ಸಂಸ್ಥೆ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರನ ಘಟಕಗಳ ನಿರ್ವಹಣೆಯನ್ನು ಸಹಕಾರ ಸಂಘ/ಸಂಸ್ಥೆರವರೇ ನಿರ್ವಹಿಸ ಬೇಕಾಗಿರುತ್ತದೆ. |
| ಈ) | ಪ್ರಸಕ್ತ ಸಾಲಿನಲ್ಲಿ ತುಮಕೂರು ಜಿಲ್ಲೆಯಲ್ಲಿ ಎಷ್ಟು ಹೊಸ ನೀರಿನ ಘಟಕಗಳಿಗೆ ಅನುಮತಿ ನೀಡಲಾಗಿದೆ: ಅವುಗಳಲ್ಲಿ ಅಳವಡಿಕೆಗೆ ಬಾಕಿಯಿರುವ ನೀರಿನ ಘಟಕಗಳ ಸಂಖ್ಯೆ ಎಷ್ಟು? | ಪ್ರಸಕ್ತ ಸಾಲಿನಲ್ಲಿ ತುಮಕೂರು ಜಿಲ್ಲೆ ವ್ಯಾಪ್ತಿಯ ಗ್ರಾಮೀಣ ಜನವಸತಿಗಳಲ್ಲಿ ಮೊದಲ ಹಂತದಲ್ಲಿ 285 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿದ್ದು, ಟೆಂಡರ್ ಪ್ರಕ್ರಿಯೆ ಮುಗಿದಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ. ಎರಡನೇ ಹಂತದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಕಾಲೋನಿಗಳಿಗೆ 60 ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿದ್ದು, ಟೆಂಡರ್ ಪ್ರಕ್ರಿಯೆಯಲ್ಲಿರುತ್ತದೆ. |

ಸಂ:ಗ್ರಾಅಪ 59 ಗ್ರಾನೀಸ(6) 2018

(ಎಚ್.ಕೆ. ಪಾಟೀಲ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು